ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ಸಿ.ಎ.ಎ. ಹಾಗೂ ಎನ್.ಆರ್.ಸಿ. ಹೋರಾಟಗಳ ದೇಶದ್ರೋಹದ ಮೊಕದ್ದಮೆ ಕುರಿತು

ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ) -

187 (1555) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ರಾಜ್ಯದಲ್ಲಿ ಕಳೆದ 03 ತಿಂಗಳಿನಿಂದ ಸಿ.ಎ.ಎ. ಹಾಗೂ ಎನ್.ಆರ್.ಸಿ. ವಿರುದ್ಧ ನಡೆದ ಹೋರಾಟಗಳ ಸಂಖ್ಯೆ ಎಷ್ಟು ; ಈ ಹೋರಾಟಗಳಲ್ಲಿ ಭಾಗವಹಿಸಿದ/ನೇತೃತ್ವ ವಹಿಸಿದ ವ್ಯಕ್ತಿಗಳು, ಸಂಘಟನೆಗಳು ಯಾವುವು ಮತ್ತು ಯಾರು ಯಾರು ;

(ಆ) ಈ ಹೋರಾಟಗಳಲ್ಲಿ ಭಾಗವಹಿಸಿ ದೇಶ ದ್ರೋಹದ ಆರೋಪದ ಮೇಲೆ ಎಷ್ಟು ಮೊಕದ್ದಮೆಗಳನ್ನು ದಾಖಲಿಸಲಾಗಿದೆ ; ಈ ಆರೋಪ ಹೊತ್ತವರ ಹಿನ್ನೆಲೆ, ಅವರು ಈ ಹಿಂದೆ ಯಾವುದಾದರು ಸಂಘಟನೆಗಳಲ್ಲಿ ಪಾಲ್ಗೊಂಡಿದ್ದರೇ; ಹಾಗೂ ಈ ಹೋರಾಟಕ್ಕೆ ಕುಮ್ಮಕ್ಕು, ಪ್ರಚೋದನೆ ನೀಡಿದವರ ಮಾಹಿತಿ ಇದ್ದಲ್ಲಿ ಅವರುಗಳ ವಿವರಗಳನ್ನು ಒದಗಿಸುವುದು ಹಾಗೂ ಈ ಹಿಂದೆ ಇವರುಗಳ ಮೇಲೆ ಯಾವುದಾದರೂ ಮೊಕದ್ದಮೆಗಳು ಇವೆಯೇ ;

(ಇ) ಇವರ ಮೇಲೆ ಕೈಗೊಂಡಿರುವ ಕ್ರಮದ ವಿವರಗಳನ್ನು ಹಾಗೂ ಈ ರೀತಿಯ ಅಹಿತಕರ ಘಟನೆಗಳು ನಡೆಯದಂತೆ ಸರ್ಕಾರ ಕೈಗೊಂಡ ಕ್ರಮಗಳೇನು ?